# ಕರ್ನಾಟಕ ವಿಧಾನ ಪರಿಷತ್ತು

01 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 528 (477)

02 ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

03 ಉತ್ತರಿಸುವ ದಿನಾಂಕ : 24.09.2020

04 ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿರುವ ನೈಜೀರಿಯನ್ ಪ್ರಜೆಗಳ ಸಂಪೂರ್ಣ ಮಾಹಿತಿ ಸರ್ಕಾರದ ಬಳಿ ಇದೆಯೇ; ಇವರಲ್ಲಿ ವೀಸಾ ಅವಧಿ ಮುಗಿದಿದ್ದರೂ ಇಲ್ಲೆ ವಾಸವಿರುವ ನೈಜೀರಿಯನ್ ಪ್ರಜೆಗಳು ಎಷ್ಟು; | ಬೆಂಗಳೂರಿನಲ್ಲಿರುವ ನೈಜೀರಿಯನ್ ಪ್ರಜೆಗಳ ಮಾಹಿತಿಯು ಸರ್ಕಾರದ ಬಳಿ ಇರುತ್ತದೆ.<br><br>ಬೆಂಗಳೂರಿನಲ್ಲಿ 291 ನೈಜೀರಿಯನ್ ಪ್ರಜೆಗಳು ವೀಸಾ ಅವಧಿ ಮುಗಿದಿದ್ದರೂ ಇಲ್ಲೇ ವಾಸವಿರುವುದಾಗಿ ಪತ್ತೆ ಆಗಿರುತ್ತದೆ. |
| ಆ) | ಈ ನೈಜೀರಿಯನ್ ಪ್ರಜೆಗಳು ಹಿಂದಿನಿಂದಲೂ ಡ್ರಗ್ಸ್ ದಂದೆಯಲ್ಲಿ ಸಕ್ರಿಯರಾಗಿದ್ದಾರೆನ್ನುವ ಆರೋಪ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಈವರೆಗೆ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ; | ಡ್ರಗ್ಸ್ ದಂಧೆಯಲ್ಲಿ ಭಾಗಿಯಾಗಿರುವ ನೈಜೀರಿಯನ್ ಪ್ರಜೆಗಳ ವಿರುದ್ಧ ಎನ್.ಡಿ.ಪಿ.ಎಸ್. ಕಾಯ್ದೆಯಡಿಯಲಿ ಪ್ರಕರಣ ದಾಖಲಿಸಿ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಹೆಣ್ಣೂರು ಮತ್ತು ಬಾಣಸವಾಡಿ ಸುತ್ತಮುತ್ತ ಹೆಚ್ಚು ನೈಜೀರಿಯನ್ ಪ್ರಜೆಗಳು ವಾಸವಿದ್ದು, ಸ್ಥಳೀಯ ಯುವಕ ಯುವತಿಯರನ್ನು ಡ್ರಗ್ಸ್ ವ್ಯಸನಕ್ಕೆ ಗುರಿಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಹೆಣ್ಣೂರು ಪೊಲೀಸ್ ಠಾಣೆ ಮತ್ತು ಬಾಣಸವಾಡಿ ಪೊಲೀಸ್ ಠಾಣೆ ಸರಹದ್ದುಗಳಲ್ಲಿ ವಾಸವಾಗಿರುವ ನೈಜೀರಿಯನ್ ಪ್ರಜೆಗಳು ಡ್ರಗ್ಸ್ ದಂಧೆಯಲ್ಲಿ ಭಾಗಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಅಂತಹ ನೈಜೀರಿಯನ್ ಪ್ರಜೆಗಳ ವಿರುದ್ಧ ಕಾನೂನು ರೀತ್ಯಾ ಪ್ರಕರಣಗಳನ್ನು ದಾಖಲಿಸಿ, ಬಂಧಿಸಿ ಕ್ರಮ ಕೈಗೊಳ್ಳಲಾಗಿರುತ್ತದೆ.<br><br>**ವಿವರಗಳು ಈ ಕೆಳಕಂಡಂತಿವೆ.** |

| ಕ್ರ. ಸಂ. | ಪೊಲೀಸ್ ಠಾಣೆ | ಡ್ರಗ್ಸ್ ದಂಧೆಗೆ ಸಂಬಂಧಿಸಿದಂತೆ ನೈಜೀರಿಯನ್ ಪ್ರಜೆಗಳ ವಿರುದ್ಧ ದಾಖಲಾದ ಪ್ರಕರಣಗಳ ಸಂಖ್ಯೆ | | | |
|---|---|---|---|---|---|
| | | **2017** | **2018** | **2019** | **2020** |
| 1 | ಬಾಣಸವಾಡಿ | 02 | -- | 01 | 02 |
| 2 | ಹೆಣ್ಣೂರು | 05 | 02 | 05 | 02 |

| ಕ್ರ. ಸಂ. | ಪೊಲೀಸ್ ಠಾಣೆ | ಡ್ರಗ್ಸ್ ದಂಧೆಗೆ ಸಂಬಂಧಿಸಿದಂತೆ ಬಂಧಿಸಿರುವ ನೈಜೀರಿಯನ್ ಪ್ರಜೆಗಳ ಸಂಖ್ಯೆ | | | |
|---|---|---|---|---|---|
| | | **2017** | **2018** | **2019** | **2020** |
| 1 | ಬಾಣಸವಾಡಿ | 02 | -- | 01 | 03 |
| 2 | ಹೆಣ್ಣೂರು | 07 | 02 | 05 | 02 |

| | | |
|---|---|---|
| ಈ) | ನೈಜೀರಿಯನ್ ಪ್ರಜೆಗಳ ಬಳಿ ಎಲ್.ಎಸ್.ಡಿ. ಕೊಕೇನ್, ಹೆರಾಯಿನ್, ಕೋಬ್ರಾ ಪಾಯ್ಸನ್ ನಂತಹ ಅತ್ಯಂತ ಭಯಾನಕ ಡ್ರಗ್ಸ್‌ಗಳಿವೆ ಎನ್ನುವ ಮಾಹಿತಿ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಡ್ರಗ್ಸ್ ಹೇಗೆ ನೈಜೀರಿಯನ್ ಪ್ರಜೆಗಳನ್ನು ತಲುಪುತ್ತಿದೆ; ಇವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ? | ಡ್ರಗ್ಸ್ ದಂಧೆಯಲ್ಲಿ ತೊಡಗಿಸಿಕೊಂಡಿರುವ ವಿದೇಶಿಯರ ಚಟುವಟಿಕೆಗಳನ್ನು ತಡೆಗಟ್ಟಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>1. ಡ್ರಗ್ಸ್ ಮಾರಾಟಗಾರರು ಮಾದಕ ವಸ್ತುಗಳ ಮಾರಾಟ/ಸೇವನೆಯ ಪ್ರಕರಣಗಳಲ್ಲಿ ಆರೋಪಿಗಳಿಗೆ ಯಾವ ಮೂಲಗಳಿಂದ ಮಾದಕ ವಸ್ತುಗಳ ಸರಬರಾಜಾಗುತ್ತಿರುವ ಬಗ್ಗೆ ಸಂಪೂರ್ಣ ಮಾಹಿತಿ ಸಂಗ್ರಹಿಸಲು ಸೂಚಿಸಲಾಗಿರುತ್ತದೆ.<br>2. ಇಂತಹ ಕೃತ್ಯಗಳಲ್ಲಿ ತೊಡಗಿರುವ ವಿದೇಶಿಯರನ್ನು ದಸ್ತಗಿರಿ ಮಾಡಿ ಅವರುಗಳ ಪಾಸ್‌ಪೋರ್ಟ್‌ಗಳನ್ನು ಮುಟ್ಟುಗೋಲು ಹಾಕಿಕೊಂಡು ಕಾನೂನಿನ ಕ್ರಮ ಕೈಗೊಳ್ಳಲಾಗುತ್ತಿದೆ.<br>3. ವಿದೇಶಿಯರು ವಾಸದ ಬಗ್ಗೆ ಮಾಹಿತಿಯನ್ನು ಸಂಬಂಧಪಟ್ಟ ಪೊಲೀಸ್ ಠಾಣೆಗಳಿಗೆ ಒದಗಿಸುವಂತೆ ಈಗಾಗಲೇ ಸೂಚನೆಗಳನ್ನು ನೀಡಲಾಗಿದೆ. ವಿಶೇಷ ಕಾರ್ಯಾಚರಣೆಗಳನ್ನು ನಡೆಸಿ ಇಂತಹ ಕೃತ್ಯವೆಸಗುವಂತಹವರ ವಿರುದ್ಧ ಕಠಿಣ ಕಾನೂನಿನ ಕ್ರಮ ಕೈಗೊಳ್ಳಲಾಗುತ್ತಿದೆ.<br>4. ಮಾದಕ ವಸ್ತುಗಳ ಅಕ್ರಮ ಸಾಗಾಣಿಕೆ ಮತ್ತು ಮಾರಾಟ ತಡೆಗಟ್ಟುವ ಸಲುವಾಗಿ, ಠಾಣಾ ಮಟ್ಟದಲ್ಲಿ ಗೌಪ್ಯ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ.<br>5. ಮಾದಕದ್ರವ್ಯ (ಡ್ರಗ್ಸ್) ಹಾವಳಿಯನ್ನು ತಡೆಗಟ್ಟಲು ಸೂಕ್ತ ನಿಗಾವಹಿಸಿ ಮಾದಕ ದ್ರವ್ಯಗಳ ಮಾರಾಟ ಮತ್ತೆ ಸೇವಿಸುವವರ ಬಗ್ಗೆ ಮಾಹಿತಿ ಸಂಗ್ರಹಿಸಲಾಗುತ್ತಿರುತ್ತದೆ. ಈ ಬಗ್ಗೆ ಬಾತ್ಮಿದಾರರಿಗೂ ಸಹ ಮಾಹಿತಿಯನ್ನು ನೀಡುವಂತೆ ಸೂಚಿಸಲಾಗಿರುತ್ತದೆ.<br>6. ಎನ್.ಡಿ.ಪಿ.ಎಸ್. ಕಾಯ್ದೆ ಅಡಿಯಲ್ಲಿ ದಾಖಲಾದ ಎಲ್ಲಾ ಆರೋಪಿಗಳಿಗೆ ಎಂ.ಓ.ಬಿ., ಯನ್ನು ತೆರೆಯಲಾಗುತ್ತಿದ್ದು ಮತ್ತು ಆರೋಪಿತನ ಪೂರ್ಣ ಮಾಹಿತಿಯನ್ನೊಳಗೊಂಡ ತನಿಖಾ ವರದಿಯನ್ನು ಸಂಗ್ರಹಿಸಲಾಗುತಿದೆ.<br>7. ಮಾದಕ ವಸ್ತುಗಳ ಮಾರಾಟ ಜಾಲವನ್ನು ಪತ್ತೆ ಹಚ್ಚಿ ಅವರ ಮೊಬೈಲ್ ಸಿ.ಡಿ.ಆರ್. ಅನ್ನು ವಿಶ್ಲೇಷಿಸಿ ಮಾದಕ ವಸ್ತುಗಳ ಮಾರಾಟದ ಮೂಲದ ಬಗ್ಗೆ ಮಾಹಿತಿ ಸಂಗ್ರಹಿಸಿ ಕ್ರಮ ಜರುಗಿಸಲಾಗುತ್ತಿದೆ.<br>8. ಮಾದಕ ವಸ್ತುಗಳ ಅಕ್ರಮ ಮಾರಾಟ ದಂಧೆಯಲ್ಲಿ ಭಾಗಿಯಾಗಿ ಪದೇ ಪದೇ ಇಂತಹ ಕೃತ್ಯಗಳಲ್ಲಿ ತೊಡಗಿದ್ದಂತಹ ರೂಢಿಗತ ಡ್ರಗ್ಸ್ ಮಾರಾಟಗಾರರ ವಿರುದ್ಧ PIT NDPS ಅಡಿ ಕ್ರಮ ಜರುಗಿಸಲಾಗುತ್ತಿದೆ. |

ಸಂಖ್ಯೆ: ಒಇ 300 ಪಿಎಂಎಸ್ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು